ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ಅಡಿಕೆ ಮಂಡಳಿ ರಚಿಸುವ ಬಗ್ಗೆ

ಶ್ರೀ ಐವನ್ ಡಿ'ಸೋಜಾ(ನಾಮನಿರ್ದೇಶನ ಹೊಂದಿದವರು):-

236 (1862) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಅಡಿಕೆ ಮಂಡಳಿ ರಚಿಸಲು ಕಳೆದ ಬಾರಿ ಸದನದಲ್ಲಿ ಭರವಸೆ ನೀಡಿದ್ದು, ಈ ಬಗ್ಗೆ ಕೈಗೊಂಡಿರುವ ಕ್ರಮವೇನು ; (ವಿವರ ನೀಡುವುದು)

(ಆ) ರಾಜ್ಯದಲ್ಲಿ ಅಡಿಕೆ ಬೆಳೆಗಾರರಿಗೆ ಪ್ರೋತ್ಸಾಹಿಸಲು ಮತ್ತು ಸಂಕಟದಿಂದ ಪಾರು ಮಾಡಲು ಸರ್ಕಾರದ ಮುಂದಿರುವ ಯೋಜನೆಗಳಾವುವು ; (ವಿವರ ನೀಡುವುದು)

(ಇ) ಅಡಿಕೆ ಕ್ಯಾನ್ಸರ್‌ಕಾರಕ ಎಂದು ಕೇಂದ್ರ ಸರ್ಕಾರ ಸುಪ್ರೀಂಕೋರ್ಟ್‌ನಲ್ಲಿ ಸಲ್ಲಿಸಿದ ಅಫಿಡೇವಿಟ್ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು ; ಪ್ರಸ್ತುತ ಯಾವ ಹಂತದಲ್ಲಿದೆ ;

(ಈ) ರಾಜ್ಯದಲ್ಲಿ ಉತ್ಪಾದಿಸುವ ಅಡಿಕೆಗೆ ಉತ್ತಮ ಧಾರಣೆ ಒದಗಿಸಲು ಸರ್ಕಾರ ಕೈಗೊಂಡಿರುವ ಯೋಜನೆಗಳಾವುವು ? (ವಿವರ ನೀಡುವುದು)